

## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 662
ಸದಸ್ಯರ ಹೆಸರು : ಶ್ರೀ ಮಂಜುನಾಥ್ ಭಂಡಾರಿ
ಉತ್ತರಿಸಬೇಕಾದ ದಿನಾಂಕ : 22.02.2022
ಉತ್ತರಿಸಬೇಕಾದ ಸಚಿವರು : ನಗರಾಭಿವೃದ್ಧಿ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಮಂಗಳೂರು ಮಹಾನಗರ ಪಾಲಿಕೆಯಲ್ಲಿ ಸಂಗ್ರಹಿಸಲಾದ ತ್ಯಾಜ್ಯವನ್ನು ಯಾವ ಸಂಸ್ಥೆಯಿಂದ ನಿರ್ವಹಣೆ ಮಾಡಲಾಗುತ್ತಿದೆ; ಈ ಸಂಸ್ಥೆಯ ಟೆಂಡರ್ ಅವಧಿ ಎಷ್ಟು; ಪ್ರಸ್ತುತ, ಮಂಗಳೂರು ಮಹಾನಗರ ಪಾಲಿಕೆಯಲ್ಲಿ ಸಂಗ್ರಹಿಸಲಾಗುತ್ತಿರುವ ದಿನ ನಿತ್ಯದ ತ್ಯಾಜ್ಯದ ಪ್ರಮಾಣವೆಷ್ಟು; ಇವುಗಳನ್ನು ವೈಜ್ಞಾನಿಕವಾಗಿ ಸಂಸ್ಕರಣೆ ಮಾಡಲಾಗುತ್ತಿದೆಯೇ; ಇಲ್ಲವಾದಲ್ಲಿ, ಯಾವ ಕ್ರಮದಲ್ಲಿ ವಿಲೇವಾರಿ ಮಾಡಲಾಗುತ್ತಿದೆ. | ಪ್ರಸ್ತುತ ಮಂಗಳೂರು ಮಹಾನಗರ ಪಾಲಿಕೆಯಲ್ಲಿ ಪ್ರತಿ ನಿತ್ಯ ಸಂಗ್ರಹಿಸಲಾಗುವ ಅಂದಾಜು 310 ಟನ್ ತ್ಯಾಜ್ಯದ ಪೈಕಿ ಸುಮಾರು 50 ರಿಂದ 80 TPD ಹಸಿ ತ್ಯಾಜ್ಯವನ್ನು BLACK SOLIDER FLY LARVAE ವಿಧಾನವನ್ನು ಬಳಸಿ M/S ENTO PROTEINS PVT LTD ಸಂಸ್ಥೆಯ ವತಿಯಿಂದ ಪ್ರಾಯೋಗಿಕವಾಗಿ 6 ತಿಂಗಳ ಅವಧಿಗೆ ಹಸಿ ತ್ಯಾಜ್ಯ ಸಂಸ್ಕರಣೆ ಮಾಡಲು ತಾತ್ಕಾಲಿಕವಾಗಿ ಅನುಮತಿ ನೀಡಲಾಗಿರುತ್ತದೆ. ಉಳಿಕೆ ಹಸಿ ತ್ಯಾಜ್ಯವನ್ನು WINDOW COMPOSTING ಮುಖಾಂತರ ಪಾಲಿಕೆ ವತಿಯಿಂದ ಸಂಸ್ಕರಿಸಲಾಗುತ್ತಿದೆ. ಪಚ್ಚನಾಡಿಯಲ್ಲಿ ಸಂಗ್ರಹವಾಗುವ ಒಣ ತ್ಯಾಜ್ಯವನ್ನು M/S R.J.N. ENTERPRISES ರವರಿಗೆ ಪ್ರಾಯೋಗಿಕವಾಗಿ ಕಾರ್ಯ ನಿರ್ವಹಿಸಲು ಅನುಮತಿ ನೀಡಿದ್ದು, ಸದರಿಯವರು ಅಂದಾಜು 50 ರಿಂದ 80 ಟನ್ ಒಣ ತ್ಯಾಜ್ಯವನ್ನು ವಿಂಗಡಿಸಿ, ಪುನರ್ ಬಳಕೆ ವಸ್ತುಗಳನ್ನು ಬೇರ್ಪಡಿಸಿ, ಉಳಿಕೆ ಅನುಪಯುಕ್ತ ಒಣ ತ್ಯಾಜ್ಯವನ್ನು ಬೇಲ್ ಮಾಡಿ ಸಿಮೆಂಟ್ ಕಾರ್ಖಾನೆಗಳಿಗೆ ರವಾನಿಸಲಾಗುತ್ತಿದೆ. ಇತರೆ ಅನುಪಯುಕ್ತ 15% ರಷ್ಟು ತ್ಯಾಜ್ಯವನ್ನು (INERT WASTE AND REJECTS FROM PROCESSING) ನೆಲಭರ್ತಿ ಮಾಡಲಾಗುತ್ತಿದೆ. |
| ಆ) | ಪಚ್ಚನಾಡಿಯಲ್ಲಿ ಭೂ ಭರ್ತಿ ಮಾಡಿ ಉಳಿಕೆಯಾಗಿರುವ ಜಾಗದ ವಿಸ್ತೀರ್ಣವೆಷ್ಟು; ಈಗ ಮಹಾನಗರ ಪಾಲಿಕೆಯನ್ನು ಹೊರತುಪಡಿಸಿ ಯಾವ ಯಾವ ಸ್ಥಳೀಯ ಸಂಸ್ಥೆಗಳಿಂದ ಎಷ್ಟು ಪ್ರಮಾಣದ ಕಸವನ್ನು ಪಚ್ಚನಾಡಿನಲ್ಲಿ ವಿಲೇವಾರಿ ಮಾಡಲಾಗುತ್ತಿದೆ; (ಸ್ಥಳೀಯ ಸಂಸ್ಥೆವಾರು ಮಾಹಿತಿ ನೀಡುವುದು) | ಮಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಪಚ್ಚನಾಡಿಯಲ್ಲಿ ಘನತ್ಯಾಜ್ಯ ನಿರ್ವಹಣೆಗಾಗಿ ಒಟ್ಟು 77.93 ಎಕರೆ ಜಾಗವನ್ನು ಮೀಸಲಿಟ್ಟಿದ್ದು ಈ ಪೈಕಿ ಅಂದಾಜು 15 ಎಕರೆ ಜಾಗವನ್ನು ನೆಲಭರ್ತಿಗಾಗಿ ಬಳಸಲಾಗುತ್ತಿದ್ದು, ಉಳಿದ ಜಾಗವನ್ನು ಕಾಂಪೋಸ್ಟ್ ಘಟಕ, ಹಸಿರು ವಲಯ, SOCIAL FORESTRY ಇತ್ಯಾದಿಗಳಿಗೆ ವಿನಿಯೋಗಿಸಲಾಗಿರುತ್ತದೆ.<br>ಪ್ರಸ್ತುತ ಪಚ್ಚನಾಡಿಯಲ್ಲಿ (1) ಉಳ್ಳಾಲ ನಗರಸಭೆಯಿಂದ ಅಂದಾಜು 10 ಟನ್ ಘನತ್ಯಾಜ್ಯ, (2) ಕೋಟೇಕಾರು ಪಟ್ಟಣ ಪಂಚಾಯತಿಯಿಂದ ಅಂದಾಜು 3 ಟನ್ ಪ್ರತಿ ನಿತ್ಯ ಮತ್ತು ಇತರೆ ಖಾಸಗಿ ಸಂಸ್ಥೆಗಳ ಮನವಿಯ ಮೇರೆಗೆ ತಾತ್ಕಾಲಿಕವಾಗಿ ನಿಗಧಿಪಡಿಸಲಾಗಿರುವ ಶುಲ್ಕ ಪಾವತಿಸಿಕೊಂಡು ವಿಂಗಡಿಸಿದ ತ್ಯಾಜ್ಯವನ್ನು ಮಾತ್ರ ಪಚ್ಚನಾಡಿ ತ್ಯಾಜ್ಯ ನಿರ್ವಹಣಾ ಘಟಕದಲ್ಲಿ ವಿಲೇವಾರಿ ಮಾಡಲು ಅನುಮತಿ ನೀಡಲಾಗಿರುತ್ತದೆ. |

| | | |
|---|---|---|
| ಇ) | ಪಚ್ಚನಾಡಿಯಲ್ಲಿ ಘನತ್ಯಾಜ್ಯ ಭೂ ಭರ್ತಿಯಿಂದ ಬಿಡುಗಡೆಯಾದ ಕಲುಷಿತ ನೀರು ಫಲ್ಗುಣಿ ನದಿಗೆ ಮತ್ತು ಮರವೂರು ಡ್ಯಾಂಗೆ ಸೇರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ಹೌದಾದಲ್ಲಿ, ಸರ್ಕಾರದ ಕ್ರಮವೇನು) | ಪಚ್ಚನಾಡಿ ನೆಲಭರ್ತಿ ಜಾಗದಿಂದ ಉತ್ಪತ್ತಿಯಾಗುವ ಅಲ್ಪ ಪ್ರಮಾಣದ ಲೀಚೆಟ್ ಅನ್ನು 1,00,000ಲೀ. ಸಾಮರ್ಥ್ಯದ ಲೀಚೆಟ್ ಸಂಗ್ರಹಣ ಟ್ಯಾಂಕ್ ನಲ್ಲಿ ಸಂಗ್ರಹಿಸಿ, ನಂತರ ಸಮೀಪದ S.T.P. ಗೆ ಸಾಗಿಸಲಾಗುತ್ತಿದೆ. ಇದರ ಹೊರತಾಗಿ ಸೋರಿಕೆಯಾಗಿ ಹೊರ ಹರಿಯುವ ಲೀಚೆಟ್ ಸುಮಾರು 3.5 ಕಿ.ಮೀ. ನಿಂದ 4ಕಿ.ಮೀ. ಹರಿದು ಸ್ವಯಂ ಶುದ್ಧೀಕರಣಗೊಂಡು ಫಲ್ಗುಣಿ ನದಿಗೆ ಸೇರುತ್ತದೆ. ಇದರೊಂದಿಗೆ ಲೀಚೆಟ್ ಸಂಸ್ಕರಣೆಗಾಗಿ EM(EFFECTIVE MICROBIAL) SOLUTION ಕೂಡ ಬಳಸಲಾಗುತ್ತಿದೆ. ಜೊತೆಗೆ ನೆಲಭರ್ತಿ ಜಾಗದಲ್ಲಿ ಪಾರಂಪರಿಕ ತ್ಯಾಜ್ಯದ ನಿರ್ವಹಣೆಗಾಗಿ (LEGACY WASTE MANAGEMENT THROUGH BIO-MINING AND BIO REMEDIATION) ಈಗಾಗಲೇ ಟೆಂಡರ್ ಕರೆದಿದ್ದು, ಪ್ರಕ್ರಿಯೆಯು ಅಂತಿಮ ಹಂತದಲ್ಲಿರುತ್ತದೆ. |
| ಈ) | ಪಚ್ಚನಾಡಿಯಲ್ಲಿ ಭೂ ಭರ್ತಿ ಮಾಡಿದ ತ್ಯಾಜ್ಯವನ್ನು ಸಂಸ್ಕರಣೆ ಮಾಡಲು ಮಹಾನಗರ ಪಾಲಿಕೆಯಿಂದ ಯಾವ ಕ್ರಮವಹಿಸಲಾಗಿದೆ; ಈ ಕುರಿತು ಸರ್ಕಾರಕ್ಕೆ ಯೋಜನಾ ವರದಿಯನ್ನು ಸಲ್ಲಿಸಲಾಗಿದೆಯೇ; ಟೆಂಡರ್ ಕರೆಯಲಾಗಿದೆಯೇ; (ಸಂಪೂರ್ಣ ಮಾಹಿತಿಯನ್ನು ನೀಡುವುದು) | ಪಚ್ಚನಾಡಿಯಲ್ಲಿ ತ್ಯಾಜ್ಯ ವಿಲೇವಾರಿ ಘಟಕದ ಪಾರಂಪರಿಕ ತ್ಯಾಜ್ಯದ ನಿರ್ವಹಣೆ ಮಾಡಲು ವಿಸ್ತೃತ ಯೋಜನಾ ವರದಿಯನ್ನು ತಯಾರಿಸಿ, ಅನುಮೋದನೆ ಪಡೆದುಕೊಂಡು ಟೆಂಡರ್ ಕರೆಯಲಾಗಿದೆ. ಪ್ರಸ್ತುತ ಟೆಂಡರ್ ಮೌಲ್ಯಮಾಪನದ ನಂತರ ಪಾರಂಪರಿಕ ತ್ಯಾಜ್ಯದ ನಿರ್ವಹಣೆಗಾಗಿ (LEGACY WASTE MANAGEMENT THROUGH BIO-MINING AND BIO REMEDIATION) ಈಗಾಗಲೇ ಟೆಂಡರ್ ಕರೆದಿದ್ದು, ಪ್ರಕ್ರಿಯೆಯು ಅಂತಿಮ ಹಂತದಲ್ಲಿರುತ್ತದೆ. |
| ಉ) | ಗ್ರಾಮಾಂತರ ಸ್ಥಳೀಯ ಸಂಸ್ಥೆಗಳು ತ್ಯಾಜ್ಯ ಸಂಸ್ಕರಣೆ ಮಾಡಿ ದೊರೆತ ಗೊಬ್ಬರ, ಗುಜರಿ ವಸ್ತುಗಳಿಂದ ಆದಾಯವನ್ನು ಪಡೆಯುತ್ತಿದ್ದು, ಮಂಗಳೂರು ಮಹಾನಗರ ಪಾಲಿಕೆಯಲ್ಲಿ ಈ ಕುರಿತು ಕೈಗೊಂಡ ಕ್ರಮವೇನು? | ಪಚ್ಚನಾಡಿಯ ಘನತ್ಯಾಜ್ಯ ಸಂಸ್ಕರಣಾ ಘಟಕದಲ್ಲಿ ಘನತ್ಯಾಜ್ಯ ಸಂಸ್ಕರಣೆಯಿಂದ ಉತ್ಪತ್ತಿಯಾಗುವ ಗೊಬ್ಬರವನ್ನು ಮಾರಾಟ ಮಾಡಲಾಗುತ್ತಿದೆ. |

ನಅಇ 12 ಎಂಎಂಸಿ 2022 (ಇ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು

**(ಬಿ.ಎ. ಬಸವರಾಜ)**
**ನಗರಾಭಿವೃದ್ಧಿ ಸಚಿವರು**